

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 1602 (1858)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇ ಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಪ್ರವಾಸೋದ್ಯಮ ಮತ್ತು ಪರಿಸರ ಮತ್ತು ಜೀವಿ ಪರಿಸ್ಥಿತಿ ಸಚಿವರು

ವಿಷಯ : ಇ-Waste (Electronic Waste) ಬಗ್ಗೆ

(ಅ) ಹೊರ ರಾಷ್ಟ್ರಗಳಿಂದ 2ನೇ ಹಂತದ ಉಪಯೋಗಕ್ಕಾಗಿ ಬಳಕೆಯಾದ ಎಲೆಕ್ಟ್ರಾನಿಕ್ ಉಪಕರಣಗಳು ಕರ್ನಾಟಕ ರಾಜ್ಯಕ್ಕೆ ಸ್ವೀಕೃತವಾಗುತ್ತಿವೆಯೇ; ಈ ಉಪಕರಣಗಳು ಇ-Waste (Electronic Waste)ಎಂದು ವರ್ಗೀಕರಣವಾಗುವುದಿಲ್ಲವೇ; (ವಿವರ ನೀಡುವುದು)

(ಆ) ರಾಜ್ಯದಲ್ಲಿ ಪ್ರತಿವರ್ಷ ಉತ್ಪನ್ನವಾಗುವ e-waste ಎಷ್ಟು; (ಕಳೆದ 3 ವರ್ಷದ ಜಿಲ್ಲಾವಾರು ವಿವರ ನೀಡುವುದು) ಈ ರೀತಿ ವರ್ಗೀಕರಿಸಿದ –Waste ನಲ್ಲಿ ಅಂದಾಜು ಎಷ್ಟು ಪ್ರಮಾಣದಷ್ಟು e-waste ನ್ನು ಮರು ಬಳಕೆಯಾಗುತ್ತಿದೆ ಮತ್ತು ಪರಿಷ್ಕೃತವಾಗಿರುತ್ತದೆ; ಇದರಲ್ಲಿ ಬಹುತೇಕ ಭಾಗ ಅಸಂಘಟಿತ ವಲಯದಲ್ಲಿ ಇದ್ದು, ಈ ಸಮಸ್ಯೆ ಆತಂಕಕಾರಿಯಾಗಿರುವುದು ರಾಜ್ಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಕೈಗೊಂಡ ಕ್ರಮಗಳ ಬಗ್ಗೆ ವಿವರ ನೀಡುವುದು;

(ಇ) ಈ ಬಗ್ಗೆ ಕೇಂದ್ರ ಅಥವಾ ರಾಜ್ಯ ಸರ್ಕಾರವಾಗಲೀ ಅಥವಾ ಕೇಂದ್ರೀಯ ಮಾಲಿನ್ಯ ನಿಯಂತ್ರಣ ಮಂಡಳಿ ಅಥವಾ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ (KSPCB) e-wasteನಲ್ಲಿ ಯಾವ ಬಗೆಯ e-waste ನ್ನು ಪರಿಸರ ಮತ್ತು ವಾಯು ಮಾಲಿನ್ಯವಿಲ್ಲದೆ ಹಾಗೂ ಆರೋಗ್ಯಕ್ಕೆ ಹಾನಿಕರವಾಗದೆ ಮರುಬಳಕೆ ಮತ್ತು ಪರಿಷ್ಕರಿಸಬಹುದು ಎಂದು ಮಾರ್ಗದರ್ಶನವುಳ್ಳ ಅಧಿಸೂಚನೆ ಹೊರಡಿಸಿದೆಯೇ; (ವಿವರ ನೀಡುವುದು)

(ಈ) ಕೇಂದ್ರ ಸರ್ಕಾರದ CPCB ರೂಪಿಸಿರುವ ನಿಯಮಗಳನ್ನು ಮತ್ತು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ರೂಪಿಸಿರುವ ಮಾರ್ಗದರ್ಶನಗಳ ಉಲ್ಲಂಘನೆ ಪ್ರಕರಣಗಳೆಷ್ಟು; ಇಂತಹ ಪ್ರಕರಣಗಳಲ್ಲಿ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು)

(ಉ) ಒಟ್ಟಾರೆ ರಾಜ್ಯದಲ್ಲಿ ಆಧುನಿಕ ರೀತಿಯಲ್ಲಿ e-wasteಸಂಗ್ರಹ, ನಿರ್ವಹಣೆ ಮತ್ತು ವಿಲೇವಾರಿ ಬಗ್ಗೆ ರೂಪಿಸಿರುವ ಮೇಲುಸ್ತುವಾರಿ ಮತ್ತು ಮೂಲ ಸೌಕರ್ಯದ ವ್ಯವಸ್ಥೆಗಳೇನು;

(ಊ) ಈ ದಿಸೆಯಲ್ಲಿ ಕೌಶಲ್ಯಾಭಿವೃದ್ಧಿ ಇಲಾಖೆಯ ಕುಶಲತೆ ಮತ್ತು ಪರಿಣತಿಯನ್ನು ಬಳಸಿಕೊಳ್ಳುವ ಆಲೋಚನೆ ಇದೆಯೇ?